**ಹಣ ಪಾವತಿಸುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಯಾವುದೇ ಶೆಡ್ಯೂಲ್ಡ್ ಬ್ಯಾಂಕಿನಿಂದ ನಗದೀಕರಿಸುವಂತಾಗಿರತಕ್ಕದ್ದು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 23.8.2005
2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ: 1.9.2005 ಮತ್ತು 2.9.2005
3) ಭರ್ತಿ ಮಾಡಿದ ಮೊಹರು ಬಂದ ಟೆಂಡರ್ ದಸ್ತಾವೇಜುಗಳನ್ನು ಸ್ವೀಕರಿಸುವ ಕೊನೆಯ ದಿ: 14.9.2005
4) ಭರ್ತಿ ಮಾಡಲಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ
   (ಅ) ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಾರ್ಯಾಲಯದಲ್ಲಿ
   (ಬ) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲಬರ್ಗಾ ಇವರ ಕಾರ್ಯಾಲಯದಲ್ಲಿ
   (ಕ) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಕಾರ್ಯಾಲಯದಲ್ಲಿ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸುವುದು.
5) ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಭಾಗ, ಕುಷ್ಟಗಿ ಇವರ ಹೆಸರಿಗೆ ಪಡೆದಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು ಈ ಇ.ಎಂ.ಡಿ.ಯನ್ನು ಟೆಂಡರ್ ತೆರೆದ ದಿನಾಂಕದಿಂದ 180 (ಒಂದನೂರ ಎಂಭತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.
6) ಈ ಕೆಳಕಂಡ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.
   ಅ) ಕೆ.ಪಿ.ಡಬ್ಲ್ಯೂಡಿ ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
   ಬ) ಇತ್ತೀಚಿನ ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.
   ಕ) ಕರ್ನಾಟಕ ರಾಜ್ಯದ ಇತ್ತೀಚಿನ ಸೇಲ್ಸ್‌ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.

ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ದಿನಾಂಕ: 23.8.2005 ಅಥವಾ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.

7) ತಾಂತ್ರಿಕ ಬಿಡ್ಡುಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯಲ್ಲಿ ದಿನಾಂಕ: 19.9.2005 ರಂದು ಮಧ್ಯಾಹ್ನ 4.00 ಗಂಟೆಗೆ ಅಥವಾ ಸಾಧ್ಯವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿ ನೋಟಿಸ್ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ-1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳ ಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1) ವೈಯಕ್ತಿಕ ಫರ್ಮ್/ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.

2004-05ನೇ ಆರ್ಥಿಕ ಸಾಲಿನ ಹಿಂದಿನಿಂದ 5 ವರ್ಷಗಳ ವಹಿವಾಟಿನ ವಿವರ:(2000-01 ರಿಂದ 2004-05)

1) ಕನಿಷ್ಟ ಎರಡು ಆರ್ಥಿಕ ವರ್ಷದಲ್ಲಿ ರೂ. 450.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ್ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು.
   1) ಕಳೆದ 5 ವರ್ಷಗಳಲ್ಲಿ ವರ್ಷ 2004-05ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.
   2) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಟ ಇಂತಹದೇ ಒಂದು ಸಿವಿಲ್ ಕಾಮಗಾರಿ (ಶೇಕಡಾ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಕಾಂಕ್ರೀಟ್ ಕೆಲಸ, ಮಣ್ಣಿನ ಏರಿ ನಿರ್ಮಾಣ ಹಾಗೂ ಕಾಲುವೆ ನಿರ್ಮಾಣ) ರೂ. 200.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿರಬೇಕು. ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತಃ ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.
   3) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಟ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.::

| | | | |
|---|---|---|---|
| (ಅ) | ಅಗೆತದ ಕೆಲಸ (ಎಲ್ಲಾ ಸ್ಥರಗಳು ಸೇರಿದಂತೆ) | - | 100000 ಘ.ಮೀ. |
| (ಬ) | ಮಣ್ಣಿನ ಏರಿ ಕೆಲಸ | - | 52000 ಘ.ಮೀ. |
| (ಕ) | ಕಾಂಕ್ರೀಟ್ ಕೆಲಸ | - | 7200 ಘ.ಮೀ. |

2) ಅರ್ಜಿದಾರರು ಪ್ರದರ್ಶಿಸುವುದು.
   (ಅ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇತಂಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರು ಹೊಂದಿರಬೇಕು.
   (ಆ) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ತಿ ಅಥವಾ ಹಣರೂಪದಲ್ಲಿ ಕನಿಷ್ಠ ರೂ. 200.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್-ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು)
   (ಇ) ಗುತ್ತಿಗೆದಾರರು ಈ ಕೆಳಕಾಣಿಸಿದ ಯಂತ್ರೋಪಕರಣಗಳನ್ನು ಸ್ವಂತ ಅಥವಾ ಲೀಸ್ ಮೇಲೆ ಹೊಂದಿರತಕ್ಕದ್ದು.

| | | | |
|---|---|---|---|
| ಅ) | ಎಕ್ಸ್‌ಕವೇಟರ್ / ಪೋಕಲೇನ್ (0.9 ಘ.ಮೀ. ಸಾಮರ್ಥ್ಯ) | - | 2 ಸಂಖ್ಯೆ |
| ಆ) | ಲಾರಿಗಳು/ ಟಿಪ್ಪರ್‌ಗಳು | - | 6 ಸಂಖ್ಯೆ |
| ಇ) | ಕಂಪ್ರೆಸರ್ಸ್/ವ್ಯಾಗನ್ ಡ್ರಿಲ್ಲರ್ | - | 1 ಸಂಖ್ಯೆ |

ಈ) ಕಾಂಕ್ರೀಟ್ ಮೆಶಿನ್ ಮಿಕ್ಸರ್ (10/7 ಘ.ಅಡಿ ಸಾಮರ್ಥ್ಯ) - 2 ಸಂಖ್ಯೆ
ಉ) ವೈಬ್ರೇಟರ್ - 2 ಸಂಖ್ಯೆ
ಊ) ಪಂಪ್‌ಸೆಟ್ (5 ಹೆ.ಚ್.ಪಿ.) - 2 ಸಂಖ್ಯೆ
ಎ) ಡಿ.ಆರ್.ಆರ್. (ರೋಡ್ ರೋಲರ್) (8-10 ಟನ್ ಸಾಮರ್ಥ್ಯ) - 2 ಸಂಖ್ಯೆ

3) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.
4) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.

ಆರ್ಥಿಕ ಬಿಡ್ (ಭಾಗ-2) ರಲ್ಲಿ 2 ಭಾಗಗಳಿದ್ದು, ಭಾಗ-1 (ಭಾಗ-2) ರಲ್ಲಿ ಆರ್ಥಿಕ ಬಿಡ್ ಇದ್ದ ಗುತ್ತಿಗೆದಾರರು ಐಟಂವಾರು ದರಗಳನ್ನು ಗುತ್ತಿಗೆಗೆ ಇಟ್ಟ ವಿವರಣೆಯ ಪ್ರಕಾರ ಷೆಡ್ಯೂಲ್ 'ಎ' ಮತ್ತು ಷೆಡ್ಯೂಲ್ 'ಬಿ' ಆಧಾರದ ಮೇಲೆ ನಮೂದಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಮಾಡುವುದು ಅಥವಾ ತಮ್ಮದೇ ಆದ ನಿಬಂಧನೆಗಳನ್ನು ಆರ್ಥಿಕ ಬಿಡ್ಡಿನ ಭಾಗ-1 ರಲ್ಲಿ ಮಾಡತಕ್ಕದ್ದಲ್ಲ. ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್ ಭಾಗ-2 ಮಾತ್ರ ದಿನಾಂಕ 27.9.2005 ರಂದು ಬೆಳಿಗ್ಗೆ 10.00 ಗಂಟೆಗೆ ತೆರೆಯಲಾಗುವುದು.

5) ಗುತ್ತಿಗೆದಾರರು ಕಾಮಗಾರಿ ನಿರ್ವಹಿಸುವ ಬಗ್ಗೆ ಅವಶ್ಯಕ ಮಾನವ ಶಕ್ತಿ ಹೊಂದಿರಬೇಕು.
6) ಅಂಚೆ/ಕೊರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.
7) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.
8) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರುಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.
9) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯ ನೋಟಿಸ್ ಫಲಕದಲ್ಲಿ ಪ್ರಕಟಿಸಲಾಗುವುದು.
10) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ, ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.
11) ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಭಾಗವಹಿಸುವುದು. ನಂತರ ಕಾಮಗಾರಿಯ ಸ್ಥಳದ ಬಗ್ಗೆ ಯಾವುದೇ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರವಾಗುವುದಿಲ್ಲ.
12) ಟೆಂಡರ್ ಡಾಕ್ಯೂಮೆಂಟಿನ ಭಾಗ-2ರ ಸೆಕ್ಷನ್-1ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
13) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.
14) ಎರಡೂ ಲಕೋಟೆ ಮೇಲೆ ಕೆಲಸದ ಹೆಸರು ಹಾಗೂ ಲಕೋಟೆ-1 ಹಾಗೂ ಲಕೋಟೆ-2 ಎಂದು ಸ್ಪಷ್ಟವಾಗಿ ಬರೆಯತಕ್ಕದ್ದು.

**ಅಣ್ಣಪ್ಪ ಎ.ಕೆ.**

ಪಿ.ಆರ್. 418 ಕಾರ್ಯಪಾಲಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವಿಜಾಪೂರ ವಿಭಾಗ, ವಿಜಾಪೂರ

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

### ಸಂಖ್ಯೆ: ಬಿ1/KSFMBC/ಟೆಂಡರ್/2005-06, ದಿನಾಂಕ: 20ನೇ ಜುಲೈ 2005

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಸುವುದೇನೆಂದರೆ, 2005-06ನೇ ಸಾಲಿನಲ್ಲಿ ವಿಜಾಪೂರ ಪ್ರಾದೇಶಿಕ ಅರಣ್ಯ ವಿಭಾಗದ ವಿಜಾಪೂರ ಮತ್ತು ಬ.ಬಾಗೇವಾಡಿ ವಲಯದ ಅರಣ್ಯ ಕ್ಷೇತ್ರದಲ್ಲಿ ಕಾಲಬದ್ಧ ಅರಣ್ಯೀಕರಣ ಕಾಮಗಾರಿಯನ್ನು ಮಾಡುವ ಕೆಲಸಕ್ಕಾಗಿ ಈ ವಿಭಾಗದಲ್ಲಿ 2005-06ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರನ್ನು ದಿ: 6.8.2005 ರಂದು 3.00 ಗಂಟೆಗೆ ಕರೆಯಲಾಗಿದೆ. ಪ್ರತಿ ಟೆಂಡರ್ ಜೊತೆಯಲ್ಲಿ ಇ.ಎಂ.ಡಿ. ಶೇಕಡಾ 2 ರಂತೆ ಸಲ್ಲಿಸಬೇಕಾಗುವುದು. ಇ.ಎಂ.ಡಿ. ಇಲ್ಲದ ಟೆಂಡರನ್ನು ತಿರಸ್ಕರಿಸಲಾಗುವುದು.

ಒಂದು ವೇಳೆ ದಿನಾಂಕ 6.8.2005 ರಂದು ಯಾವುದೇ ಘಟಕಗಳಿಗೆ ಟೆಂಡರುಗಳು ಬಾರದಿದ್ದಲ್ಲಿ/ಅಂತಿಮಗೊಳ್ಳದಿದ್ದಲ್ಲಿ ಮತ್ತೆ ಎರಡನೇ ಬಾರಿಗೆ ಟೆಂಡರನ್ನು ದಿನಾಂಕ 10.8.2005 ರಂದು 3.00 ಗಂಟೆಗೆ ಕರೆಯಲಾಗಿದೆ/ನಿಗದಿಪಡಿಸಲಾಗಿದೆ.

**ಅನುಬಂಧ**

| ಅ.ನಂ. ಯು ನಂ. | ಶೀರ್ಷಿಕೆ | ವಲಯ | ಸ್ಥಳ | ಕೆಲಸದ ವಿವರ | ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. ಹಣ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | KSF-MBC Model-1 | ವಿಜಾಪೂರ (ಪ್ರಾ). | ಮಮದಾಪೂರ ಅರಣ್ಯ ಪ್ರದೇಶ 200 ಹೆ. | ಅ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 94-a ದಡಿ ವಿವರಿಸಿರುವಂತೆ ಅಳತೆ ಅನುಸಾರ ಅಂದಾಜು 10 Km. ಜಾನುವಾರು ನಿರೋಧಕ ಕಂದಕ ಅಗೆಯುವುದು | 525000 | |

| 1 | 2 | 3 | 4 | 5 | 6 | 7 |
|---|---|---|---|---|---|---|
| | | | | ಬ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 94-e ಅನುಸಾರದ ವಿವರಣೆಯಂತೆ ಹಾಳಾದ ಜಾನುವಾರು ನಿರೋಧಕ ಕಂದಕಗಳ ದುರಸ್ತಿ ಕೆಲಸ ಅಂದಾಜು 10.9 Km. | 57225 | |
| | | | | ಕ) ಅರಣ್ಯ ಪ್ರದೇಶದಲ್ಲಿ ಬೀಜ ಹಾಕಲು 30 ಸೆಂ.ಮೀ. ವ್ಯಾಸದ ತಟ್ಟೆ ಆಕಾರದಲ್ಲಿ 20 ಸೆ.ಮೀ. ಆಳಕ್ಕೆ ಮಣ್ಣನ್ನು ಅಗೆದು ಕೆಳ ಭಾಗದಲ್ಲಿ ಕಲ್ಲುಗಳಿಂದ ರಕ್ಷಣೆ ಕೊಟ್ಟು ಮೇಲ್ಭಾಗದಲ್ಲಿ ಮಣ್ಣು ಸವಕಳಿ ಆಗದಂತೆ 1ಮೀ. ಉದ್ದದ ತೋಳು ಚರಂಡಿಯನ್ನು ಮಾಡುವುದು 80000 - ತಟ್ಟೆಗಳು | 120000 | |
| | | | | **ಒಟ್ಟು** | **702225** | **14050** |
| 2 | KSF-MBC Model-1 | ಬಸವನ ಬಾಗೇವಾಡಿ | ಚಿಮ್ಮಲಗಿ ಅರಣ್ಯ ಪ್ರದೇಶ 100 ಹೆ. | ಅ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 94-a ದಡಿ ವಿವರಿಸಿದಂತೆ ಅಳತೆ ಅನುಸಾರ ಅಂದಾಜು 3.5 Km. ಜಾನುವಾರು ನಿರೋಧಕ ಕಂದಕ ಅಗೆಯುವುದು. | 183750 | |
| | | | | ಬ) ಅರಣ್ಯ ಪ್ರದೇಶದಲ್ಲಿ ಬೀಜ ಹಾಕಲು 30 ಸೆ.ಮೀ. ವ್ಯಾಸದ ತಟ್ಟೆ ಆಕಾರದಲ್ಲಿ 20 ಸೆ.ಮೀ. ಆಳಕ್ಕೆ ಮಣ್ಣನ್ನು ಅಗೆದು ಕೆಳಭಾಗದಲ್ಲಿ ಕಲ್ಲುಗಳಿಂದ ರಕ್ಷಣೆ ಕೊಟ್ಟು ಮೇಲ್ಭಾಗದಲ್ಲಿ ಮಣ್ಣು ಸವಕಳಿ ಆಗದಂತೆ 1ಮೀ. ಉದ್ದದ ತೋಳು ಚರಂಡಿಯನ್ನು ಮಾಡುವುದು 40000 ತಟ್ಟೆಗಳು | 60000 | |
| | | | | **ಒಟ್ಟು** | **243750** | **4875** |
| 3. | KSF-MBC Model-4 | ವಿಜಾಪೂರ (ಪ್ರಾ) | ಮಮದಾಪೂರ ಅರಣ್ಯಪ್ರದೇಶ 100 ಹೆ. | ಅ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 29-c ಯ ವಿವರಣೆಯಂತೆ 0.60x0.60x0.60 M ಅಳತೆಯ 10000 ಗುಂಡಿಗಳನ್ನು ತೋಡುವುದು | 90700 | |
| | | | | ಬ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 31-B ಯಂತೆ PJ ಅನಗತ್ಯ ಮುಳ್ಳುಕಂಟಿಯನ್ನು ಬೇರು ಸಹಿತ ತೆಗೆದು ಸ್ಥಳ ತಯಾರಿಯೊಂದಿಗೆ ಡೋಜರ ಸಹಾಯದಿಂದ ರಿಪ್ಪಿಂಗ್ ಕೆಲಸ ಕೈಕೊಳ್ಳುವುದು 75cm depth, 45 cm, Width - 50000 Tr. (215000) ಮೀಟರ್ | 515000 | |
| | | | | ಕ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 94-a ದಡಿ ವಿವರಿಸಿದಂತೆ ಅಳತೆ ಅನುಸಾರ ಅಂದಾಜು 6500 ಮೀ ಜಾನುವಾರು ನಿರೋಧಕ ಕಂದಕ ಅಗೆಯುವುದು. | 341250 | |
| | | | | ಡ) ಇಲಾಖಾ ಅನುಸೂಚಿತ ದರಗಳ ಕ್ರ. ಸಂ. 94-e ವಿವರಣೆಯಂತೆ ಹಾಳಾದ ಜಾನುವಾರು ನಿರೋಧಕ ಕಂದಕಗಳ ದುರಸ್ತಿ ಕೆಲಸ ಅಂದಾಜು 600 ಮೀ. | 3150 | |
| | | | | **ಒಟ್ಟು** | **950100** | **19010** |

ಸದರಿ ಕೆಲಸದ ಕುರಿತು ಹೆಚ್ಚಿನ ಮಾಹಿತಿ ಹಾಗೂ ಷರತ್ತುಗಳಿಗಾಗಿ ವಿಭಾಗ ಕಛೇರಿಯಲ್ಲಿ ಹಾಗೂ ವಲಯ ಅರಣ್ಯ ಅಧಿಕಾರಿ, ವಿಜಾಪೂರ ಮತ್ತು ಬ.ಬಾಗೇವಾಡಿ ಕಛೇರಿಯಲ್ಲಿ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ - ಟೆಂಡರ್ ದಿನದಂದು ಮಧ್ಯಾಹ್ನ 12 ಗಂಟೆಯವರೆಗೆ

ಟೆಂಡರ್ ಫಾರಂಗಳನ್ನು ಹಾಕುವ ದಿನಾಂಕ: 6.8.2005 ರಂದು ಮ. 3 ಗಂಟೆಯವರೆಗೆ ಮತ್ತು ಮರು ಟೆಂಡರ್ ಆದಲ್ಲಿ ಟೆಂಡರ್ ಫಾರಂಗಳನ್ನು ಹಾಕುವ ದಿನಾಂಕ 10.8.2005 ರಂದು ಮ. 3 ಗಂಟೆಯವರೆಗೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವಿಜಾಪೂರ ವಿಭಾಗ, ವಿಜಾಪೂರ.

ಪಿ.ಆರ್. 419

**Office of the Executive Engineer, Cauvery Neeravary Nigama Limited Yagachi Project Division, Belur Dist, Hassan.**

**Prequalification cum tender notification No.05/2005-06/dated 23rd July 2005**

Manual/Electronic Tendering in two cover system is called from the K.P.W.D. Registered Class-I contractors for the work of "Balance Work for Design, Fabrication, supply and errection at site of radial Crest gates, stoplog gates. irrigation sluice gates, emergency gate, gantry crane for spillway and irrigation sluices of Yagachi Reservoir Project.

(a) Radial Gates 12 x 7 M 5 Nos. with accessories
(b) Irrigation Sluice gates 3 Nos. of size 2.25 x 2.50 M with all accessories

(1) Amount put to Tender Rs. 62.30 Lakhs
(2) E.M.D. Rs. 62,300/-
(3) Cost of Blank Tender documents including tax Rs. 8,000/-
(4) Period of completion 6 months.

The contractor's should invariably mentioned whether they want to submit Tender manually or by E-Tendering. The blank tender forms can be obtained through web site "www Tender wizard.com/CNNL. Two cover system consisting of Technical Bid as part-I and Financial Bid as part II shall be followed. The evaluation of Technical bid will be done based solely on the information provided by the contractor as per documents Financial Bid of only those bidders who qualify in the Technical Bid will be opened.

(1) Training on E.Tendering will be conducted for the aspiring bidders at 11.30 AM on 10.8.05 at the office of the Executive Engineer, Yagachi Reservoir Project Belur.
(2) The aspiring contractors who have not previously obtained the user in password for participation in E-tendering in CNNL may now obtain the same by requesting in writing to the Executive Engineer of the Division at Belur on produce the original registration Pass Book E-mail ID and Identification proof for issuing of user ID and passwords on or before 10.8.2005.
(3) Bidder/supplier can request application for the Blank Tender Documents from this office on 10.8.2005 upto 5.00 P.M. on payment of Tender form fee
(4) Blank Tender documents will be issued from 10.00 AM to 5.00 PM on 12.08.2005.
(5) Last date for submission of filled documents on 16.8.2005 upto 4.00 P.M. both for manual and Electronic mode.
(6) Tender i.e. cover I Technical bid will be opened on 17.8.2005 at 11.30 AM or any other convenient working day which will be intimated.
(7) Further information can be had from website "www.tender Wizard.com/CNNL or from the office of the undersigned.

**ELIGIBILITY AND PRE-QUALIFICATION CONDITION**

(1) Tenderer should have executed errection and maintenance of Gates or similar nature of work in the preceeding three years (completion certificate to that extent should be furnished)
(2) Tenderer should have achieved a financial progress of Rs. 50.00 Lakhs through Mechanical works in any one of the preceeding five years.

For details see office Notification and may be had further details in the office during office hours.

P.D. 82 Executive Engineer, CNNL Yagachi Project Division, BELUR.

**ಜಲ ಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ನಂ.5 ಭದ್ರಾ ನಾಲಾ ವಿಭಾಗ, ದಾವಣಗೆರೆ**

**ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ**

**ವಿಷಯ:** ಟೆಂಡರ್ ಅವಧಿ ವಿಸ್ತರಣೆ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂ.ಭನಾವಿ.5:ಸಇಂ.2:ಟೆಂಡರ್:2005-06:414-18 ದಿನಾಂಕ: 10.5.2005.
2. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ:ಭನಾವಿ.5:ಸಇಂ 2:ಟೆಂಡರ್:2005-06:718:18 ದಿನಾಂಕ: 20.6.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರ (1) ರಲ್ಲಿ 26 ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದ್ದು, ಟೆಂಡರ್ ಪ್ರಕಟಣೆಯಲ್ಲಿ ನಮೂದಿಸಿರುವ ಈ ಕೆಳಕಂಡ ಕಾಮಗಾರಿಗಳ ಅವಧಿಯನ್ನು ತಾಂತ್ರಿಕ ಕಾರಣಗಳಿಂದ ಮುಂದಿನ ಪ್ರಕಟಣೆಯವರೆಗೆ ಮುಂದೂಡಲಾಗಿದೆ.

ಮೂಲ ಟೆಂಡರ್ ಪ್ರಕಟಣೆಯಲ್ಲಿ ನಮೂದಿಸಿರುವ ಕ್ರಮಸಂಖ್ಯೆ: 3,4,8,9,16,17 ಮತ್ತು 18ರ ಕಾಮಗಾರಿಗಳು. ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಹೆಚ್.ಎನ್. ಮೂರ್ತಿ**

ಪಿ.ಆರ್. 420 ಕಾರ್ಯಪಾಲಕ ಇಂಜಿನಿಯರ್ ನಂ.5, ಭದ್ರಾ ನಾಲಾ ವಿಭಾಗ, ದಾವಣಗೆರೆ.

## ಜಲ ಸಂಪನ್ಮೂಲ ಇಲಾಖೆ
## ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ನಂ.5 ಭದ್ರಾ ನಾಲಾ ವಿಭಾಗ, ದಾವಣಗೆರೆ
## ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ

**ವಿಷಯ:** ಟೆಂಡರ್ ಅವಧಿ ವಿಸ್ತರಣೆ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂ.ಭನಾವಿ.5:ಸಇಂ.2:ಟೆಂಡರ್:2005-06:413-18 ದಿನಾಂಕ: 10.5.2005.
2. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ:ಭನಾವಿ.5:ಸಇಂ1:ಕಿಇಂ:2:ಟೆಂಡರ್:2005-06:719:18 ದಿನಾಂಕ: 20.6.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರ (1) ರಲ್ಲಿ 22 ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದ್ದು, ಟೆಂಡರ್ ಪ್ರಕಟಣೆಯಲ್ಲಿ ನಮೂದಿಸಲಾದ ಈ ಕೆಳಕಂಡ ಕಾಮಗಾರಿಗಳ ಅವಧಿಯನ್ನು ತಾಂತ್ರಿಕ ಕಾರಣಗಳಿಂದ ಮುಂದಿನ ಪ್ರಕಟಣೆಯವರೆಗೆ ಮುಂದೂಡಲಾಗಿದೆ.

ಮೂಲ ಟೆಂಡರ್ ಪ್ರಕಟಣೆಯಲ್ಲಿ ನಮೂದಿಸಿರುವ ಕ್ರಮಸಂಖ್ಯೆ: 1,2,3,4,8,9,10,11,12,13,14,15 ಮತ್ತು 16ನೇ ಕಾಮಗಾರಿಗಳು. ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಹೆಚ್.ಎನ್. ಮೂರ್ತಿ**
ಪಿ.ಆರ್. 421 ಕಾರ್ಯಪಾಲಕ ಇಂಜಿನಿಯರ್, ನಂ.5, ಭದ್ರಾ ನಾಲಾ ವಿಭಾಗ, ದಾವಣಗೆರೆ.

## ಜಿಲ್ಲಾ ಪೊಲೀಸ್ ಕಛೇರಿ, ದಾವಣಗೆರೆ ಜಿಲ್ಲೆ
## ಸಂಕ್ಷಿಪ್ತ ಅಧಿಸೂಚನೆ
### ಸಂಖ್ಯೆ: ಲೆಕ್ಕ(5)ವಾಹನ 47:97-98, ದಿನಾಂಕ: 22ನೇ ಜುಲೈ 2005

**ವಿಷಯ:** ದಾವಣಗೆರೆ ಜಿಲ್ಲೆಯ ಪೊಲೀಸ್ ಇಲಾಖೆಯ 8 ವಾಹನಗಳನ್ನು ಮತ್ತು ವಲಯ ಕಛೇರಿಯ 2 ವಾಹನಗಳನ್ನು ಟೆಂಡರ್ ಕಮ್ ಹರಾಜು ಮೂಲಕ ದಿ:10.10.2005 ರಂದು ಸಾರ್ವಜನಿಕರಿಗೆ ಮಾರಾಟ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:142:ಶಿವಾನಿ:2000 ದಿನಾಂಕ:5.1.2001.
2. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 03:ಇಎಂವಿ 2004 ದಿ:12.5.2005.
3. ಪ್ರಧಾನ ಕಛೇರಿ ಅಧಿಕೃತ ಜ್ಞಾಪನ ಸಂಖ್ಯೆ.ಬಿಯುಡಿ(4)26:89-90 ದಿ:26.11.92.
4. ಪ್ರಧಾನ ಕಛೇರಿ ಪತ್ರ ಸಂಖ್ಯೆ: ವಾಸಾ(1)28:03-04 ದಿ:3.12.2003.
5. ಪ್ರಧಾನ ಕಛೇರಿ ಜ್ಞಾಪನ ಸಂಖ್ಯೆ. ವಾಸಾ(1)58:02-03 ದಿ:9.6.2005.
6. ವಲಯ ಕಛೇರಿ ಆದೇಶ ಸಂಖ್ಯೆ: ಪಿಎಂಟಿ ಇಆರ್:132:02-03 ದಿ:14.11.2002.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಉಲ್ಲೇಖ (2) ಮತ್ತು (4)ರ ಆದೇಶಗಳಲ್ಲಿ ನಿರುಪಯುಕ್ತಗೊಳಿಸಲಾಗಿರುವ ದಾವಣಗೆರೆ ಜಿಲ್ಲಾ ಪೊಲೀಸ್ ಇಲಾಖೆಯ 8 ವಾಹನಗಳನ್ನು ಹಾಗೂ ಪೂರ್ವ ವಲಯ ಕಛೇರಿಯ 2 ವಾಹನಗಳನ್ನು ದಿ:10.10.2005 ರಂದು ಬೆಳಿಗ್ಗೆ 11-00 ಗಂಟೆಗೆ ದಾವಣಗೆರೆ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿ ಉಳ್ಳ ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಈ ವಾಹನಗಳನ್ನು ಖರೀದಿಸಬಹುದಾಗಿರುತ್ತದೆ. ಹರಾಜ್ ಮಾಡುವ ವಾಹನಗಳ ವಿವರಗಳು ಕೆಳಕಂಡಂತಿರುತ್ತವೆ.

| ಕ್ರ. ಸಂ. | ವಾಹನ ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| | **ದಾವಣಗೆರೆ ಜಿಲ್ಲೆಯ ಪೊಲೀಸ್ ವಾಹನಗಳು:** | | |
| 1. | ಎಂವೈಯು 9399 | ಎನ್‌ಫೀಲ್ಡ್ ಬುಲೆಟ್ ಮೋಟಾರ್ ಸೈಕಲ್ | 1979 |
| 2. | ಸಿಎಜಿ 4028 | ಎನ್‌ಫೀಲ್ಡ್ ಬುಲೆಟ್ ಮೋಟಾರ್ ಸೈಕಲ್ | 1980 |
| 3. | ಸಿಎಜಿ 4004 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1981 |
| 4. | ಸಿಎಜಿ 4003 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1980 |
| 5. | ಸಿಎಜಿ 4065 | ಜೀಪ್ | 1984 |
| 6. | ಸಿಎಜಿ 4094 | ಮೆಟಡೋರ್ ಎಫ್-305 | 1986 |
| 7. | ಸಿಎಜಿ 4081 | ಸ್ಟ್ಯಾಂಡರ್ಡ್ 20 ಮಿನಿ ಬಸ್ | 1985 |
| 8. | ಸಿಎಜಿ 4104 | ಬಜಾಜ್ ಟೆಂಪೋ | 1987 |
| | **ವಲಯ ಕಛೇರಿ ದಾವಣಗೆರೆಯ ವಾಹನಗಳು:** | | |
| 9. | ಕೆಎ 16 ಜಿ 21 | ಅಂಬಾಸಿಡರ್ ಕಾರ್ | 1991 |
| 10. | ಸಿಎಜಿ 4214 | ಯಜ್ಡಿ ಮೋಟಾರ್ ಸೈಕಲ್ | 1986 |

**ಟೆಂಡರ್ ಮತ್ತು ಹರಾಜನ್ನು ಈ ಕೆಳಗೆ ತಿಳಿಸಿದ ಷರತ್ತುಗಳು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ನಡೆಸಲಾಗುವುದು.**

1. ಈ ನಿರುಪಯುಕ್ತ ವಾಹನಗಳು ಸಶಸ್ತ್ರ ಮೀಸಲು ಪಡೆ ದಾವಣಗೆರೆಯ ಆವರಣದಲ್ಲಿರುತ್ತದೆ. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಈ ವಾಹನಗಳನ್ನು ಯಾವುದೇ ಕಛೇರಿ ದಿನಗಳಂದು ಸಾರ್ವಜನಿಕರು ನೋಡಬಹುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವ ಪ್ರತಿಯೊಬ್ಬರು ಪ್ರತಿ ವಾಹನಕ್ಕೆ ರೂ.3000-00 (ಮೂರು ಸಾವಿರ ರೂಪಾಯಿಗಳು) ಠೇವಣಿ ಹಣವನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3. ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟರು, ದಾವಣಗೆರೆ ಜಿಲ್ಲೆ ಇವರ ವಿಳಾಸಕ್ಕೆ ಲಕೋಟೆಯ ಮೇಲೆ ನಿರುಪಯುಕ್ತ ವಾಹನಗಳಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿ ಖುದ್ದಾಗಿ ಇಲ್ಲವೇ ಅಂಚೆ ಮೂಲಕ 2.10.2005 ರ ಸಂಜೆ 5-00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು.
4. ಪ್ರತಿ ಟೆಂಡರುದಾರರು ಪ್ರತಿ ವಾಹನಕ್ಕೆ ರೂ.3000-00 (ಮೂರು ಸಾವಿರ ರೂಪಾಯಿಗಳು) ಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ದಾವಣಗೆರೆ ಜಿಲ್ಲೆ ಇವರ ಹೆಸರಿನಲ್ಲಿ ತೆಗೆಸಿದ ಡಿ.ಡಿ. ಯನ್ನು ಟೆಂಡರ್ ಜೊತೆ ಲಗತ್ತಿಸಬೇಕು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರೂ ಸಹ ಠೇವಣಿ ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿ ಮಾಡಿರತಕ್ಕದ್ದು.
5. ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಿರಬೇಕು.
6. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗದು.
7. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್ ದಾವಣಗೆರೆ ಜಿಲ್ಲೆ ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ತೆರೆದು ಬಹಿರಂಗ ಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತಿ ಹೆಚ್ಚಿನ ದರ ದಾಖಲಿಸಿದ ದರವನ್ನು ಯಶಸ್ವಿ ಟೆಂಡರ್ : ಬಿಡ್‌ದಾರರೆಂದು ಪರಿಗಣಿಸಲಾಗುವುದು.
8. ಯಶಸ್ವೀ ಟೆಂಡರ್ : ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡ 25 ರಷ್ಟು ಹಣವನ್ನು ಹರಾಜಿನ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಹರಾಜು ಮಾಡಿದವರಿಗೆ ವಾಹನಗಳನ್ನು ವಹಿಸಿಕೊಡಲಾಗುವುದು. ಈ ವಾಹನಗಳನ್ನು ಯಶಸ್ವೀ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು.
9. ಎಲ್ಲಾ ಹಣವನ್ನು ಪೊಲೀಸ್ ಸೂಪರಿಂಟೆಂಡೆಂಟರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.
10. ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿಸಲಾಗುವುದು.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರು : ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.
12. ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾದ ಟೆಂಡರ್ : ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ್ದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.
13. ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೆ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ಹೊಂದಿರುತ್ತಾರೆ ಮತ್ತು ಅವರ ತೀರ್ಮಾನವೇ ಅಂತಿಮವಾದುದು.
14. ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.
15. ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ತಮ್ಮ ಪರಿಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿಮಾಡತಕ್ಕದ್ದು.
16. ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯು ಈ ಕೆಳಕಂಡಂತಿರುತ್ತದೆ.

**ಟೆಂಡರ್ ಫಾರಂನ ನಮೂನೆ**

**ನಿರುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ:

ಪೊಲೀಸ್ ಅಧೀಕ್ಷಕರು,
ದಾವಣಗೆರೆ ಜಿಲ್ಲೆ,
ದಾವಣಗೆರೆ.

ಮಾನ್ಯರೇ,

ತಮ್ಮ ಕಛೇರಿಯ ಸಂಕ್ಷಿಪ್ತ ಅಧಿಸೂಚನೆ ಸಂಖ್ಯೆ.ಲೆಕ್ಕ(5)ಎಂಟಿ:47 97-98 ದಿನಾಂಕ:22.7.2005ರಲ್ಲಿ ತಿಳಿಸಿರುವ ...................... ಸಂಖ್ಯೆಯ ವಾಹನವನ್ನು ರೂ. (ರೂಪಾಯಿ..............................................................) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

ದಿನಾಂಕ:

ಸ್ಥಳ: (ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್. 422 ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ.

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ

## ಬಹಿರಂಗ ಹರಾಜು ಪ್ರಕಟಣೆ

### ಸಂ:ಎಂ.ಟಿ/116/2005, ದಿನಾಂಕ: 18ನೇ ಜುಲೈ 2005

**ವಿಷಯ:** ಗದಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದಲ್ಲಿರುವ 5 ಸಂಖ್ಯೆಯ ಅನುಪಯುಕ್ತ ಹಳೆಯ ವಾಹನಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರಕಾರಿ ಆದೇಶ ಸಂ:ಎಚ್‌ಡಿ/3/ಇಎಂವಿ/04, ದಿ: 12.5.05.

2. ಪ್ರಧಾನ ಕಛೇರಿಯ ಹಿಂಬರಹ ಸಂ:ವಾಸಾ(1)58/02-03, ದಿ:09.06.05.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಹೆಸರಿಸಿರುವ 5 ಸಂಖ್ಯೆಯ ಮೋಟಾರು ಸೈಕಲ್‌ಗಳನ್ನು ಗದಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ದಿನಾಂಕ: 22.9.2005 ರಂದು ಬೆಳಿಗ್ಗೆ 11.00 ಘಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

**ವಾಹನಗಳ ವಿವರ:**

| ಅ. ಸಂ. | ವಾಹನದ ನೋಂದಣಿ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 1 | ಸಿಎಜಿ-4617 | ಮೋಟಾರ್ ಸೈಕಲ್ | 1981 |
| 2 | ಸಿಎಜಿ-4621 | ಮೋಟಾರ್ ಸೈಕಲ್ | 1981 |
| 3 | ಸಿಎಜಿ-4645 | ಮೋಟಾರ್ ಸೈಕಲ್ | 1982 |
| 4 | ಸಿಎಜಿ-4686 | ಮೋಟಾರ್ ಸೈಕಲ್ | 1984 |
| 5 | ಸಿಎಜಿ-5044 | ಮೋಟಾರ್ ಸೈಕಲ್ | 1987 |

ಮೇಲೆ ನಮೂದಿಸಿರುವ ನಿರುಪಯುಕ್ತ ವಾಹನಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ನಿಬಂಧನೆಗಳು:**

1) ಬಹಿರಂಗ ಹರಾಜಿನ ಮೂಲಕ ನಿರುಪಯುಕ್ತ ವಾಹನಗಳನ್ನು ವಿಲೇವಾರಿ ಮಾಡುವುದಿದ್ದು ಅತೀ ಹೆಚ್ಚಿನ ಬೆಲೆಗೆ ಬೇಡಿಕೆ ಬಂದರೆ ಮಾತ್ರ ವಾಹನವನ್ನು ಬಿಡ್‌ದಾರರಿಗೆ ನೀಡಲಾಗುವುದು.
2) ನಿರುಪಯುಕ್ತ ವಾಹನಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ರೂ.5,000/- (ರೂ. ಐದು ಸಾವಿರ ಮಾತ್ರ) ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
4) ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನಗಳನ್ನು ಡಿ.ಎ.ಆರ್. ಹೆಡ್ ಕ್ವಾರ್ಟರ್ಸ್ ಗದಗದಲ್ಲಿ ಪರಿಶೀಲಿಸಬಹುದು.
5) ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
6) ಠೇವಣಿಯನ್ನು ತುಂಬಿದ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ. ಠೇವಣಿ ಹಣವನ್ನು ನಗದು ರೂಪದಲ್ಲಿ ಮಾತ್ರ ಸ್ವೀಕರಿಸಲಾಗುತ್ತದೆ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ.
8) ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಸವಾಲುದಾರರೆಂದು ಪರಿಗಣಿಸಲಾಗುವುದು.
9) ನಿರುಪಯುಕ್ತ ವಾಹನಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ಮಾರಾಟ ತೆರಿಗೆಯನ್ನು ವಿಧಿಸಲಾಗುವುದು.
10) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11) ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಗದಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
12) ಯಶಸ್ವಿಯಾದ ಸವಾಲುದಾರರು ಬಿಡ್‌ದರದ ಶೇಕಡಾ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್‌ದಾರರ ಬಿಡ್‌ನ್ನು ಅನುಮೋದಿಸಿದ ನಂತರ ಬಾಕಿ ಹಣವನ್ನು ಮತ್ತು ಪ್ರಸ್ತುತ ತೆರಿಗೆಯನ್ನು ಸಂಪೂರ್ಣವಾಗಿ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ನಿರುಪಯುಕ್ತ ವಾಹನಗಳನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13) ಹರಾಜಿನ ದಿನಾಂಕವನ್ನು ಬದಲಾಯಿಸುವ, ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಗದಗ ರವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಪಿ.ಆರ್. 423 ಜಿಲ್ಲಾ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ.

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ

## ಬಹಿರಂಗ ಹರಾಜು ಪ್ರಕಟಣೆ

### ಸಂ:ಎಂ.ಟಿ/91/2005, ದಿನಾಂಕ: 18ನೇ ಜುಲೈ 2005

**ವಿಷಯ:** ಈ ಜಿಲ್ಲೆಯಲ್ಲಿಯ ವಾಹನ ಸಾರಿಗೆ ವಿಭಾಗದ ದಾಸ್ತಾನಿನಲ್ಲಿರುವ ಬಿಡಿ ಭಾಗಗಳನ್ನು ಮತ್ತು ಟಾಯರ್ ಟ್ಯೂಬ್‌ಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಆರ್‌ಪಿಐ, ಡಿಎಆರ್ ಗದಗ ರವರ ವರದಿ ಸಂ:ಡಿಎಆರ್/ಎಂ.ಟಿ./ ನಿ.ಬಿ.ಭಾ.ಟಾ.ಟ್ಯೂ/110/05-06, ದಿ: 2.6.05.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಹೆಸರಿಸಿರುವ ಅನುಪಯುಕ್ತಗೊಂಡ ವಿವಿಧ ರೀತಿಯ ವಾಹನದ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ಗದಗ ಜಿಲ್ಲಾ ಪೊಲೀಸ್ ಮೀಸಲು ಪಡೆ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ದಿನಾಂಕ: 23.9.2005 ರಂದು ಬೆಳಿಗ್ಗೆ 11.00 ಘಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

| ಅ. ಸಂ. | ಬಿಡಿಭಾಗಗಳ ವಿವರ | ಪ್ರಮಾಣ |
|---|---|---|
| 1. | ಅಲ್ಯೂಮಿನಿಯಂ | 09 ಕೆ.ಜಿ. |
| 2. | ಹೆಡ್ | 01 ಪೀಸ್ |
| 3. | ರೆಡಿಯೇಟರ್ ಕೋರ್ | 01 ಪೀಸ್ |
| 4. | ಬೇರಿಂಗ್ | 60 ಪೀಸ್ |
| 5. | ಶಾಕ್ ಅಬ್ಸರ್‌ಬರ್ | 17 ಪೀಸ್ |
| 6. | ಜಾಯಿಂಟ್ ಕ್ರಾಸ್ | 12 ಪೀಸ್ |
| 7. | ಯೋಕ್ & ಮಿಲಿಂಗ್ | 05 ಪೀಸ್ |
| 8. | ಪಾಟ್‌ಗಳು | 25 ಪೀಸ್ |
| 9. | ಟೈರಾಡ್ & ಬಾಲ್ ಜಾಯಿಂಟ್ | 80 ಪೀಸ್ |
| 10. | ಕ್ಲಚ್ ಪ್ಲೇಟ್ | 07 ಪೀಸ್ |
| 11. | ಪ್ರೆಶರ್ ಪ್ಲೇಟ್ | 07 ಪೀಸ್ |
| 12. | ಎಲ್ಲಾ ಫೌಂಡೇಶನ್‌ಗಳು | 30 ಪೀಸ್ |
| 13. | ಇನ್ನಿತರ ಕಬ್ಬಿಣದ ಸಾಮಗ್ರಿಗಳು | 30 ಕೆ.ಜಿ. |
| 14. | 750 x 20 ಸೈಜಿನ | 07 ಟಾಯರ್ಸ್, 07 ಟ್ಯೂಬ್ & 7 ಫ್ಲಾಪಿಸ್ |
| 15. | 600 x 16 ಸೈಜಿನ | 30 ಟಾಯರ್ಸ್ & 30 ಟ್ಯೂಬ್ಸ್ |
| 16. | 195.80 R 15 | 10 ಟಾಯರ್ಸ್ & 10 ಟ್ಯೂಬ್ಸ್ |
| 17. | 215.14 | 01 ಟಾಯರ್ & 01 ಟ್ಯೂಬ್ |
| 18. | 315.19 | 02 ಟಾಯರ್ಸ್ & 02 ಟ್ಯೂಬ್ಸ್ |
| 19. | 275.18 | 02 ಟಾಯರ್ಸ್ & 02 ಟ್ಯೂಬ್ಸ್ |

**ಹರಾಜಿನ ನಿಬಂಧನೆಗಳು:**

1) ಬಹಿರಂಗ ಹರಾಜಿನ ಮೂಲಕ ನಿರುಪಯುಕ್ತ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ವಿಲೇವಾರಿ ಮಾಡುವುದಿದ್ದು ಅತೀ ಹೆಚ್ಚಿನ ಬೆಲೆಗೆ ಬೇಡಿಕೆ ಬಂದರೆ ಮಾತ್ರ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ಬಿಡ್‌ದಾರರಿಗೆ ನೀಡಲಾಗುವುದು.
2) ನಿರುಪಯುಕ್ತ ಟೈರು-ಟ್ಯೂಬ್ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ರೂ.1,000/- (ರೂ. ಒಂದು ಸಾವಿರ ಮಾತ್ರ) ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
4) ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನಗಳನ್ನು ಡಿ.ಎ.ಆರ್. ಹೆಡ್ ಕ್ವಾರ್ಟರ್ಸ್ ಗದಗದಲ್ಲಿ ಪರಿಶೀಲಿಸಬಹುದು.
5) ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
6) ಠೇವಣಿಯನ್ನು ತುಂಬಿದ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ. ಠೇವಣಿ ಹಣವನ್ನು ನಗದು ರೂಪದಲ್ಲಿ ಮಾತ್ರ ಸ್ವೀಕರಿಸಲಾಗುತ್ತದೆ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ.
8) ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಸವಾಲುದಾರರೆಂದು ಪರಿಗಣಿಸಲಾಗುವುದು.
9) ನಿರುಪಯುಕ್ತ ವಾಹನ ಬಿಡಿಭಾಗಗಳು / ಟಾಯರ್ - ಟ್ಯೂಬ್‌ಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ಮಾರಾಟ ತೆರಿಗೆಯನ್ನು ವಿಧಿಸಲಾಗುವುದು.
10) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11) ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಗದಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
12) ಯಶಸ್ವಿಯಾದ ಸವಾಲುದಾರರು ಬಿಡ್‌ದರದ ಶೇಕಡಾ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಮತ್ತು ತೆರಿಗೆಯನ್ನು ಸಂಪೂರ್ಣವಾಗಿ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ನಿರುಪಯುಕ್ತ ಬಿಡಿಭಾಗಗಳನ್ನು ಮತ್ತು ಟೈರ್-ಟ್ಯೂಬ್‌ಗಳನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13) ಹರಾಜಿನ ದಿನಾಂಕವನ್ನು ಬದಲಾಯಿಸುವ, ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಗದಗ ರವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಪಿ.ಆರ್. 424 ಜಿಲ್ಲಾ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ.

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿರವರ ಕಛೇರಿ, ಹಳಿಯಾಳ ವಿಭಾಗ, ಹಳಿಯಾಳ

**ಸಂ. ಸಿ2/ಎಡಿಎಂ/ವಾಹನ/ವಿಲೇವಾರಿ/ಸಿಆರ್- /2005-06, ದಿನಾಂಕ: 25ನೇ ಜುಲೈ 2005**

**ಅರಣ್ಯ ಅಪರಾಧಗಳಲ್ಲಿ ಒಳಗೊಂಡ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳ ಟೆಂಡರ್ ಕಮ್ ಹರಾಜಿನ ಕುರಿತಾದ ಅಧಿಸೂಚನೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹಳಿಯಾಳ ಅರಣ್ಯ ವಿಭಾಗದಲ್ಲಿ ಅರಣ್ಯ ಅಪರಾಧಗಳಲ್ಲಿ ಒಳಗೊಂಡ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ಈ ಕೆಳಗೆ ನಮೂದಿಸಿದಂತಹ ವಾಹನಗಳನ್ನು ಬಹಿರಂಗವಾಗಿ ಟೆಂಡರ್ ಕಮ್ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. ಸದರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳನ್ನು ಇದ್ದ ಸ್ಥಳದಲ್ಲಿಯೇ ಯಾವ ಸ್ಥಿತಿಯಲ್ಲಿ ಇವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು. ಕಾರಣ ಆಸಕ್ತಿವುಳ್ಳವರು ಸದರಿ ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸಿ ವಾಹನಗಳನ್ನು ಪಡೆದುಕೊಳ್ಳಬಹುದಾಗಿದೆ. ಸದರಿ ಟೆಂಡರ್ ಕಮ್ ಹರಾಜನ್ನು ದಿ: 29.8.2005 ರಂದು ಕರೆಯಲಾಗಿದ್ದು ಸದರಿ ಟೆಂಡರಿನಲ್ಲಿ ಭಾಗವಹಿಸಲು ಇಡುವ ಇಎಮ್‌ಡಿ ಮೊತ್ತ ರೂ. 10000.00 ಅದೇ ದಿನ ಮಧ್ಯಾಹ್ನ 3.00 ಘಂಟೆ ಸಮಯದ ನಂತರ ಮೊದಲು ಸವಾಲನ್ನು ಮಾಡಿ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು.

ಟೆಂಡರ್ ಕಮ್ ಸವಾಲನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳರವರು ಸದರಿ ದಿನಾಂಕದಂದು ಖುದ್ದಾಗಿ ಅಥವಾ ಅವರಿಂದ ಅಧಿಕಾರವನ್ನು ಪಡೆದಂತಹ ಅಧಿಕಾರಿಗಳು ಹಳಿಯಾಳ ವಿಭಾಗೀಯ ಕಛೇರಿಯಲ್ಲಿ ನೆರವೇರಿಸುವರು.

ಟೆಂಡರ್ ಕಮ್ ಹರಾಜಿನ ಷರತ್ತುಗಳ ಕುರಿತು ಹೊರಡಿಸಲಾಗುವ ವಿವರವಾದ ಅಧಿಸೂಚನೆಯನ್ನು ಈ ಕಛೇರಿಯಲ್ಲಿ ಸರಕಾರಿ ರಜಾ ದಿನಗಳನ್ನು ಹೊರತುಪಡಿಸಿ ಖುದ್ದಾಗಿ ಸಂಪರ್ಕಿಸಿ ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು.

| ಕ್ರ. ಸಂ. | ಮುಟ್ಟುಗೋಲು ಹಾಕಿಕೊಂಡ ವಾಹನಗಳ ವಿವರ | | ಹರಾಜಿನ ಸ್ಥಳ | ಹರಾಜು ದಿನಾಂಕ |
|---|---|---|---|---|
| 1 | ಟೆಂಪೊ F 307 | KRH-7851 | ಉ.ಅ.ಸಂ. ರವರ ಕಛೇರಿ, ಹಳಿಯಾಳ ಆವರಣ | 29-8-2005 |
| 2 | ಅಶೋಕ ಲೈಲ್ಯಾಂಡ್ ಟ್ರಕ್ | MEW-8905 | -ಸದರ- | -ಸದರ- |
| 3 | ಟಾಟಾ ಟ್ರಕ್ | MYW-7605 | -ಸದರ- | -ಸದರ- |
| 4 | ಟಾಟಾ ಟ್ರಕ್ | CNG-4248 | -ಸದರ- | -ಸದರ- |
| 5 | ಟಾಟಾ ಟ್ರಕ್ | CNX-6187 | -ಸದರ- | -ಸದರ- |
| 6 | ಟಾಟಾ 609 | KA-24/2190 | -ಸದರ- | -ಸದರ- |
| 7 | ಮಾರುತಿ ಎಸ್ಟೀಮ್ | KA-26/M-807 | -ಸದರ- | -ಸದರ- |
| 8 | ಬಜಾಜ್ ಎಮ್-80 (ನೊಂದಣಿ ಸಂಖ್ಯೆ ಇಲ್ಲ) | | -ಸದರ- | -ಸದರ- |
| 9 | ಆಟೋ ರಿಕ್ಷಾ | KA-31/858 | -ಸದರ- | -ಸದರ- |

ಪಿ.ಆರ್. 425 ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ.

## ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ, ಶಿವಮೊಗ್ಗ ಜಿಲ್ಲೆ

**ಅಧಿಸೂಚನೆ ಸಂಖ್ಯೆ: ಸಂಗ್ರಹ:24:2005-06, ದಿನಾಂಕ: 22ನೇ ಜುಲೈ 005**

**ವಿಷಯ:** ಜಿಲ್ಲಾ ಪೊಲೀಸ್ ಕಛೇರಿಯ 150 ಅಡಿ ಉದ್ದದ ಕಬ್ಬಿಣದ ವೈರ್‌ಲೆಸ್ ಟವರ್‌ನ ಬಹಿರಂಗ ಹರಾಜಿನ ಬಗ್ಗೆ.

**ಉಲ್ಲೇಖ:** ಪೊಲೀಸ್ ಅಧೀಕ್ಷಕರು (ನಿಸ್ತಂತು) ಬೆಂಗಳೂರುರವರ ಪತ್ರ ನಂ:ಸಾಮಾನ್ಯ:7:ಶಿವಮೊಗ್ಗ:2005-06 ದಿ:23.6.2005.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ ಶಿವಮೊಗ್ಗ ಜಿಲ್ಲಾ ಪೊಲೀಸ್ ಕಛೇರಿಯ ಆವರಣದಲ್ಲಿರುವ ನಿರುಪಯುಕ್ತ 150 ಅಡಿ ಅಳತೆಯ ಕಬ್ಬಿಣದ ವೈರ್‌ಲೆಸ್ ಟವರ್‌ನ್ನು ಅದು ಈಗ ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ: 30.8.2005 ರಂದು ಬೆಳಿಗ್ಗೆ 11-00 ಗಂಟೆಗೆ ಟೆಂಡರ್ : ಬಹಿರಂಗ ಹರಾಜಿನಲ್ಲಿ ಶಿವಮೊಗ್ಗ ಜಿಲ್ಲಾ ಪೊಲೀಸ್ ಕಛೇರಿಯ ಆವರಣದಲ್ಲಿ ವಿಲೇವಾರಿ ಮಾಡಲು ನಿರ್ಧರಿಸಲಾಗಿದೆ.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು:-**

1) ಮೊಹರು ಮಾಡಿದ (ಸೀಲ್:ಟೆಂಡರ್) ಲಕೋಟೆಯನ್ನು ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ 150 ಅಡಿ ಕಬ್ಬಿಣದ ವೈರ್‌ಲೆಸ್ ಟವರ್‌ನ್ನು ಖರೀದಿಸುವ ಬಗ್ಗೆ ಎಂಬುದಾಗಿ ಬಿಡಿಅಕ್ಷರಗಳಲ್ಲಿ ನಮೂದಿಸಬೇಕು.
2) ಪ್ರತಿಯೊಬ್ಬ ಸವಾಲುದಾರರು ರೂ. 3,000-00 (ರೂ. ಮೂರು ಸಾವಿರ ಮಾತ್ರ) ಠೇವಣಿ ಹಣವನ್ನು ಡಿ.ಡಿ:ನಗದು ರೂಪದಲ್ಲಿ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಕಳುಹಿಸುವ ಅರ್ಜಿಯನ್ನು ತಿರಸ್ಕರಿಸಲಾಗುವುದು.
3) ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು.
4) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ:30.8.2005ರ ಸಂಜೆ 4-00 ಗಂಟೆಯ ಒಳಗಾಗಿ ಸಲ್ಲಿಸಬೇಕು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

5) ಟೆಂಡರ್‌ದಾರರು ಸಹಾ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.
6) ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗ ಪಡಿಸುವುದು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ ಸವಾಲುದಾರರೆಂದು ಪರಿಗಣಿಸಲಾಗುವುದು.
8) ಯಶಸ್ವಿ ಆದ ಟೆಂಡರ್‌ದಾರರು : ಸವಾಲುದಾರರು ಟೆಂಡರಿನ ಪೂರ್ತಿ ಹಣವನ್ನು ಸ್ಥಳದಲ್ಲಿಯೇ ತುಂಬಬೇಕು.
9) ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
10) ಹರಾಜು ಮುಗಿದ ನಂತರ ಯಶಸ್ವಿ ಆಗದ ಟೆಂಡರುದಾರರ : ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂದಿರುಗಿಸಲಾಗುವುದು.
11) ಮಾರಾಟ ತೆರಿಗೆಯನ್ನು ಹಾಲಿ ಚಲಾವಣೆಯಲ್ಲಿರುವ ನಿಯಮಗಳ ಆಧಾರದ ಮೇಲೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
12) ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
13) ಹರಾಜಿನಲ್ಲಿ ಯಾವುದೇ ಸವಾಲನ್ನು : ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಶಿವಮೊಗ್ಗ ಜಿಲ್ಲಾ ಪೊಲೀಸ್ ಅಧಿಕಾರಿಗಳು ಹೊಂದಿರುತ್ತಾರೆ. ಇವರ ಮೇಲೆ ಯಾರ ಅಧಿಕಾರವೂ ಇರುವುದಿಲ್ಲ. ಇವರ ನಿರ್ಣಯವೇ ಅಂತಿಮವಾಗಿರುತ್ತದೆ.
14) ಇಚ್ಛೆಯುಳ್ಳ ಟೆಂಡರ್:ಸವಾಲುದಾರರು ಹರಾಜು ಮಾಡಲಿರುವ 150 ಅಡಿ ನಿರುಪಯುಕ್ತ ವೈರ್‌ಲೆಸ್ ಕಬ್ಬಿಣದ ಟವರ್‌ನ್ನು ಜಿಲ್ಲಾ ಪೊಲೀಸ್ ಕಛೇರಿ, ಶಿವಮೊಗ್ಗದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಪಿ.ಆರ್. 426 ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಜಿಲ್ಲೆ.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ತುಮಕೂರು**

**ಸಂಖ್ಯೆ:ಹಿಸತೋನಿ:ರಾವ:ತು:ತಾಸ: ದಿನಾಂಕ: 18ನೇ ಜುಲೈ 2005**

**ರಾಜ್ಯ ವಲಯ ತೋಟಗಾರಿಕೆ ಕ್ಷೇತ್ರಗಳ ಸಪೋಟ ಹಾಗೂ ಸೀಬೆ ಫಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರಾಜ್ಯ ವಲಯ ತುಮಕೂರು ಜಿಲ್ಲೆ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ:ಸಸ್ಯಗಾರಗಳ ಸಪೋಟ ಮತ್ತು ಸೀಬೆ ಫಸಲಿನ 2005ನೇ ಸಾಲಿನ 2ನೇ ಅವಧಿಯ ವಿಲೇವಾರಿಗೆ ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್ ಪ್ರಕಟಣೆಯನ್ನು ಹೊರಡಿಸಿದೆ. ಟೆಂಡರ್ ಪ್ರಕ್ರಿಯೆಯನ್ನು ಅನುಬಂಧದಲ್ಲಿ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರಾಜ್ಯ ವಲಯ, ತುಮಕೂರು ರವರ ಕಛೇರಿಯ ವ್ಯಾಪ್ತಿಯಲ್ಲಿ ಬರುವ ಆಯಾಯ ತೋಟಗಾರಿಕೆ ಕ್ಷೇತ್ರಗಳಲ್ಲಿಯೇ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಸದರಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

ಟೆಂಡರ್ ಫಾರಂಗಳನ್ನು ರೂ.25-00 ಪಾವತಿ ಮಾಡಿ ಈ ಕಛೇರಿ ಅಥವಾ ಆಯಾಯ ಕ್ಷೇತ್ರಗಳಲ್ಲಿ ಪಡೆಯಬಹುದು. ಟೆಂಡರ್‌ದಾರರು ಆಯಾಯ ಫಸಲಿಗೆ ನಿಗದಿಪಡಿಸಿದ ಠೇವಣಿ ಮತ್ತು ಫಸಲಿಗೆ ತಾವು ನಮೂದಿಸಿರುವ ಟೆಂಡರ್ ಮೊತ್ತದ ಶೇಕಡಾ 50 ಭಾಗದ ಮೊತ್ತವನ್ನು ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ತುಮಕೂರು ಅಥವಾ ಆಯಾಯ ಕ್ಷೇತ್ರಾಧಿಕಾರಿಯ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿ ಸಹಿ ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆಗೆ ಅಥವಾ ಅದಕ್ಕೂ ಮೊದಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರಾಜ್ಯ ವಲಯ, ತುಮಕೂರು ರವರ ಕಛೇರಿಯಲ್ಲಿ ಸಲ್ಲಿಸಬೇಕು.

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊಬಲಗನ್ನು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳತಕ್ಕದ್ದು. ಟೆಂಡರ್ ಅಂಗೀಕರಿಸಿದ ದಿನಾಂಕದಿಂದ ಫಸಲಿನ ಪೂರ್ಣ ಉಸ್ತುವಾರಿ ಟೆಂಡರ್‌ದಾರರದ್ದೇ ಜವಾಬ್ದಾರಿಯಾಗಿರುತ್ತದೆ. ಟೆಂಡರ್ ಅಂಗೀಕರಿಸಿರುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರಗಳನ್ನು ನಿಬಂಧನೆ ಮತ್ತು ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಅನುಬಂಧ**

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಅಥವಾ ಸಸ್ಯಾಗಾರದ ಹೆಸರು | ಫಸಲಿನ ಹೆಸರು | ಫಸಲನ್ನು ರೂಢಿಸಿಕೊಳ್ಳುವ ಕೊನೆಯ ದಿನಾಂಕ | ಠೇವಣಿ ಮೊತ್ತ ರೂ. | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ ಸಂಜೆ 5.00 ಗಂಟೆಯೊಳಗೆ | ಟೆಂಡರ್ ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 1. | ರಂಗಸ್ವಾಮಿಗುಡ್ಡ ತೋ. ಕ್ಷೇತ್ರ ಕುಣಿಗಲ್ ತಾಲ್ಲೂಕು | ಸಪೋಟ<br>ಸೀಬೆ | 31.12.05<br>-"- | 2000<br>2000 | 30.8.05<br>16.8.05 | 31.8.05 (11.00)<br>17.8.05 (11-00) |
| 2. | ಹೇರೂರು ತೋ.ಕ್ಷೇತ್ರ, ಗುಬ್ಬಿ ತಾಲ್ಲೂಕು | ಸಪೋಟ | 31.12.05 | 2000 | 31.8.05 | 1.9.05 (1.00) |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಅಥವಾ ಸಸ್ಯಾಗಾರದ ಹೆಸರು | ಫಸಲಿನ ಹೆಸರು | ಫಸಲನ್ನು ರೂಢಿಸಿಕೊಳ್ಳುವ ಕೊನೆಯ ದಿನಾಂಕ | ಠೇವಣಿ ಮೊತ್ತ ರೂ. | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ ಸಂಜೆ 5.00 ಗಂಟೆಯೊಳಗೆ | ಟೆಂಡರ್ ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 3. | ತುಮಕೂರು ಜಿಲ್ಲಾ ನರ್ಸರಿ | ಸಪೋಟ | 31.12.05 | 2000 | 31.8.05 | 1.9.05 (10.30) |
| 4. | ಬೆಳಿದೇವಾಲಯ ಕ್ಷೇತ್ರ,<br>ಕುಣಿಗಲ್ ತಾ: | ಸಪೋಟ<br>ಸೀಬೆ | 31.12.05<br>-”- | 2000<br>2000 | 30.8.05<br>16.8.05 | 31.8.05 (12.00)<br>17.8.05 (12-00) |
| 5. | ಮಾರ್ಕೋನಹಳ್ಳಿ ಕ್ಷೇತ್ರ,<br>ಕುಣಿಗಲ್ ತಾ: | ಸಪೋಟ<br>ಸೀಬೆ | 31.12.05<br>31.12.05 | 2000<br>2000 | 30.8.05<br>16.8.05 | 31.8.05 (1.00)<br>17.8.05 (1.00) |
| 6. | ಇಂದಿರಾ ತೋ.ಕ್ಷೇತ್ರ<br>ಬಡವನಹಳ್ಳಿ, ಮಧುಗಿರಿ ತಾ: | ಸಪೋಟ | 31.12.05 | 2000 | 29.8.05 | 30.8.05 (1.00) |
| 7. | ನಿಡುವಳಲು ತೋ.ಕ್ಷೇತ್ರ,<br>ತುಮಕೂರು ತಾ: | ಸಪೋಟ | 31.12.05 | 2000 | 5.9.05 | 6.9.05 (11.00) |
| 8. | ಜೆ.ಸಿ.ಪುರ ತೋ.ಕ್ಷೇತ್ರ,<br>ಚಿಕ್ಕನಾಯ್ಕನಹಳ್ಳಿ ತಾ: | ಸಪೋಟ<br>ಸೀಬೆ | 31.12.05<br>31.12.05 | 2000<br>2000 | 1.9.05<br>12.8.05 | 2.9.05 (1.00)<br>16.8.05 (1.00) |
| 9. | ಮಾದಿಹಳ್ಳಿ ತೋ.ಕ್ಷೇತ್ರ,<br>ತುರುವೇಕೆರೆ ತಾ: | ಸಪೋಟ<br>ಸೀಬೆ | 31.12.05<br>31.12.05 | 2000<br>2000 | 1.9.05<br>14.8.05 | 2.9.05 (11.00)<br>16.8.05 (11.00) |
| 10. | ರಾಜವಂತಿ ತೋ.ಕ್ಷೇತ್ರ,<br>ಪಾವಗಡ ತಾ: | ಸಪೋಟ<br>ಸೀಬೆ | 31.12.05<br>31.12.05 | 2000<br>2000 | 2.9.05<br>17.8.05 | 3.9.05 (1.00)<br>18.8.05 (1.00) |
| 11. | ಶಿರಾ ಕಛೇರಿ ನರ್ಸರಿ | ಸಪೋಟ | 31.12.05 | 500 | 29.8.05 | 30.8.05 (11.00) |

ಪಿ.ಆರ್. 427 ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯ ವಲಯ) ತುಮಕೂರು.

**ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ, ಶಿವಮೊಗ್ಗ ಜಿಲ್ಲೆ**

**ಅಧಿಸೂಚನೆ ಸಂ:ಎಂಟಿ:ಲೆಕ್ಕ 6:08:05-06, ದಿನಾಂಕ: 26ನೇ ಜುಲೈ 2005**

**ವಿಷಯ:** ಶಿವಮೊಗ್ಗ ಜಿಲ್ಲೆಯ ಪೊಲೀಸ್ ಘಟಕದಲ್ಲಿ ದುರಸ್ತಿಯಾಗದ ಹಾಗೂ ದುರಸ್ತಿ ಮಾಡಲಾಗದ ನಿಷ್ಪ್ರಯೋಜಿತಗೊಳಿಸಿದ ಪೊಲೀಸ್ ವಾಹನಗಳನ್ನು ಟೆಂಡರ್‌ನ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂ:ಎಫ್‌ಡಿ 6:ಟಿಸಿಇ 87 ದಿ:15.12.92.

2. ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ, ಬೆಂಗಳೂರುರವರ ಆದೇಶ ಸಂ: ವಾಸಾ 1:89:04-05 ದಿ:14.5.05.

3. ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ ಬೆಂಗಳೂರು ರವರ ಆದೇಶ ಸಂ: ವಾಸಾ(1)58:02-03 ದಿ:9.6.05.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಶಿವಮೊಗ್ಗ ಈ ಕಛೇರಿಯ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ಶಿವಮೊಗ್ಗ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ದಿ: 30.8.2005 ರಂದು ಬೆಳಿಗ್ಗೆ 11-00 ಗಂಟೆಗೆ ಬಹಿರಂಗ ಮಾರಾಟ ಮಾಡಲಾಗುವುದು.

| ಕ್ರ. ಸಂ. | ವಾಹನದ ರಿಜಿಸ್ಟ್ರೇಷನ್ ಸಂಖ್ಯೆ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಸಿಎಜಿ 7629 | ಮೆಟಡೋರ್ | 1986 |
| 2. | ಎಂಇಎಸ್ 2004 | ಬುಲೆಟ್ ಮೋಟಾರ್ ಸೈಕಲ್ | 1976 |
| 3. | ಎಂವೈಎಸ್ 3675 | ಬೆಡ್‌ಫೋರ್ಡ್ ವ್ಯಾನ್ | 1972 |
| 4. | ಎಂಇಎಸ್ 2576 | ಬೆಡ್‌ಫೋರ್ಡ್ ವ್ಯಾನ್ | 1977 |
| 5. | ಸಿಎಜಿ 7526 | ಬೆಡ್‌ಫೋರ್ಡ್ ವ್ಯಾನ್ | 1981 |
| 6. | ಸಿಎಜಿ 493 | ಡೀಸೆಲ್ ಜೀಪು | 1982 |
| 7. | ಸಿಎಜಿ 7642 | ಡೀಸೆಲ್ ಜೀಪು | 1987 |
| 8. | ಸಿಕೆಜಿ 427 | ರಾಜ್‌ದೂತ್ ಯಮಹಾ | 1986 |
| 9. | ಕೆಎ 14 ಜಿ 262 | ಡೀಸೆಲ್ ಜೀಪು | 1994 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ವಾಹನ ಸಂಖ್ಯೆ: ..... ನ್ನು ಖರೀದಿಸುವ ಬಗ್ಗೆ ಎಂಬುದನ್ನು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಸವಾಲುದಾರನು ಪ್ರತೀ ವಾಹನಕ್ಕೆ ರೂ. 3000-00 (ಮೂರು ಸಾವಿರ ಮಾತ್ರ) ಠೇವಣಿ ಹಣವನ್ನು ಡಿ.ಡಿ. : ನಗದು ಮೂಲಕ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ

